


# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 31-03-2021 ಪ್ರಶ್ನೆ ಸಂಖ್ಯೆ : 3027 (2527)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕೆ. ಪ್ರತಾಪಚಂದ್ರ ಶೆಟ್ಟಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 31-03-2021

ಉತ್ತರಿಸುವ ಸಚಿವರು: ಉಪ ಮುಖ್ಯಮಂತ್ರಿಗಳು ಹಾಗೂ ಲೋಕೋಪಯೋಗಿ ಸಚಿವರು

ವಿಷಯ : ರಸ್ತೆಗಳ ಉನ್ನತೀಕರಣ ಮತ್ತು ಅಗಲೀಕರಣದ ಕುರಿತು

(ಅ) ಉಡುಪಿ ಜಿಲ್ಲೆಯಲ್ಲಿ ಕಳೆದ 3 ವರ್ಷಗಳಲ್ಲಿ ಯಾವ ಯಾವ ರಸ್ತೆಗಳ ಉನ್ನತೀಕರಣ ಮತ್ತು ಅಗಲೀಕರಣ ಕಾಮಗಾರಿಯನ್ನು ಕೈಗೊಳ್ಳಲಾಗಿರುತ್ತದೆ ; ಅವುಗಳ ಅಂದಾಜು ವೆಚ್ಚವೆಷ್ಟು ; ಸದರಿ ಕಾಮಗಾರಿಯು ಯಾವ ಹಂತದಲ್ಲಿದೆ ; (ವರ್ಷವಾರು ಮತ್ತು ಕಾಮಗಾರಿವಾರು ವಿವರ ನೀಡುವುದು ಹಾಗೂ ಈ ಕಾಮಗಾರಿಯ ಗುತ್ತಿಗೆದಾರರ ಹೆಸರು ಮತ್ತು ವಿಳಾಸವನ್ನು ಒದಗಿಸುವುದು)

(ಆ) ಲೋಕೋಪಯೋಗಿ ರಸ್ತೆಯ ಅಗಲೀಕರಣ ಸಂದರ್ಭದಲ್ಲಿ ರಸ್ತೆಯ ಪಕ್ಕದಲ್ಲಿ ಸ್ಥಳೀಯ ಗ್ರಾಮ ಪಂಚಾಯಿತಿಯಿಂದ ಅಳವಡಿಸಿದ ಕುಡಿಯುವ ನೀರಿನ ಪೈಪ್ ಲೈನ್‌ಗಳು ಹಾಳಾಗುವುದರಿಂದ ಕಾಮಗಾರಿಯ ಅಂದಾಜು ಪಟ್ಟಿಯಲ್ಲಿ ಪೈಪ್‌ಲೈನ್ ಅಳವಡಿಕೆಗೆ ಅವಕಾಶ ಕಲ್ಪಿಸಲಾಗುತ್ತದೆಯೇ ; ಇಲ್ಲವಾದಲ್ಲಿ, ಕಾರಣವೇನು ; ಅವಕಾಶ ಕಲ್ಪಿಸಿದ್ದಲ್ಲಿ ಜನರಿಗೆ ಅನುಕೂಲವಾಗುವುದಿಲ್ಲವೇ ;

(ಇ) ಉಡುಪಿ ಜಿಲ್ಲೆಯ ಕೋಟೇಶ್ವರ-ಸೋಮೇಶ್ವರ-ಶೃಂಗೇರಿ ರಸ್ತೆಯನ್ನು ಮೇಲ್ದರ್ಜೆಗೇರಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ ; ಇದ್ದಲ್ಲಿ, ಯಾವ ಕಾಲಮಿತಿಯಲ್ಲಿ ಮಾಡಲಾಗುವುದು?